ಕನ್ನಡ ಶೈಕ್ಷಣಿಕ ಮಾಸ ಪತ್ರಿಕೆ

# ಸಾಮಾನ್ಯ ಜ್ಞಾನ

ಮೇ ೧೯೯೦



**ಡಾ|| ಬಿ. ಆರ್. ಅಂಬೇಡ್ಕರ್**

(ಈ ಬಾರಿಯ 'ಭಾರತ ರತ್ನ' ಪ್ರಶಸ್ತಿಯನ್ನು 14-5-1990 ರಂದು ಡಾ|| ಬಿ. ಆರ್. ಅಂಬೇಡ್ಕರ್ ಅವರಿಗೆ ಮರಣೋತ್ತರವಾಗಿ ನೀಡಲಾಯಿತು).

ಸಂಪಾದಕ: ಕೊಂಡಜ್ಜಿ ಕೆ. ವೆಂಕಟೇಶ್

ಕನ್ನಡದಲ್ಲಿ ಮೊದಲು ಇದೊಂದೇ ಕನ್ನಡದಲ್ಲಿ

(ಸ್ಥಾಪನೆ ೧೯೮೨)

ನಿರಂತರ ಜ್ಞಾನವಾಹಿನಿಯಾಗಿ ಹರಿದಿದೆ

# ಸಾಮಾನ್ಯಜ್ಞಾನ

ಕನ್ನಡ ಶೈಕ್ಷಣಿಕ ಮಾಸ ಪತ್ರಿಕೆ

ಎಲ್ಲಾ ವಿದ್ಯಾರ್ಥಿಗಳಿಗೂ, ಉಪಾಧ್ಯಾಯರಿಗೂ ಹಾಗೂ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಕೂರುವ ಅಭ್ಯರ್ಥಿಗಳಿಗೂ ಅವಶ್ಯಕವಾದ ಏಕೈಕ ಕನ್ನಡದ ಮಾಸ ಪತ್ರಿಕೆ.

ವಿವಿಧ ದಿಕ್ಕಿನಲ್ಲಿ ಮಹತ್ವಪೂರ್ಣ ವಿಷಯಗಳನ್ನೊಳಗೊಂಡು ಸಂಗ್ರಹ ಯೋಗ್ಯವಾದ ರೀತಿಯಲ್ಲಿ 'ಸಾಮಾನ್ಯಜ್ಞಾನ' ಹೊರ ಬರುತ್ತಿದೆ. ವಿಜ್ಞಾನ, ಸಂಶೋಧನೆ, ಕಲೆ, ಚರಿತ್ರೆ, ಕಾನೂನು, ಕ್ರೀಡೆ ಇತ್ಯಾದಿ ವಿಷಯಗಳನ್ನೊಳಗೊಂಡು ವಿಶಿಷ್ಟ ರೀತಿಯಿಂದ ಮುನ್ನಡೆದಿದೆ.

ಇಂದೇ ಚಂದಾದಾರರಾಗಿರಿ :

ಚಂದಾ ಹಣವನ್ನು ಎಂ.ಓ. ಮೂಲಕ ಕಳುಹಿಸಿಕೊಡಬೇಕು. ಎಂ.ಓ. ಕೂಪನ್‌ನಲ್ಲಿ ತಮ್ಮ ವಿಳಾಸವನ್ನು ತಪ್ಪದೇ ಬರೆಯಬೇಕು. ಹಣ ತಲುಪಿದ ಒಂದು ತಿಂಗಳೊಳಗಾಗಿ ಪ್ರತಿ ಕಳಿಸಲು ಪ್ರಾರಂಭವಾಗುತ್ತದೆ. ಪ್ರತಿ ತಲುಪದಿದ್ದಲ್ಲಿ ಕೂಡಲೇ ಪತ್ರದ ಮೂಲಕ ತಿಳಿಸಬೇಕು.

ವಾರ್ಷಿಕ ಚಂದಾ ರೂ. ೧೫/- ಆಜೀವ ಸದಸ್ಯತ್ವ ರೂ. ೨೫೦/-

ಪೋಷಕರು : ರೂ. ೧೦೦೦/-

ಇಂದೇ ಬರೆಯಿರಿ :

ಸಂಪಾದಕರು,
ಸಾಮಾನ್ಯ ಜ್ಞಾನ
ಕನ್ನಡ ಶೈಕ್ಷಣಿಕ ಮಾಸ ಪತ್ರಿಕೆ
೨೦೫, ಮೊದಲ (ಎನ್) ಬ್ಲಾಕ್
ರಾಜಾಜಿನಗರ, ಬೆಂಗಳೂರು-೫೬೦ ೦೧೦

# ಸಾಮಾನ್ಯಜ್ಞಾನ

**ಕನ್ನಡ ಶೈಕ್ಷಣಿಕ ಮಾಸ ಪತ್ರಿಕೆ**

ಸಂಪುಟ ೮   ಸಂಚಿಕೆ ೧೧   ಮೇ ೧೯೯೦   ಪುಟ ೧೬   ಬೆಲೆ ರೂ. ೧-೦೦


## " ೯೫ನೇ ಸಂಚಿಕೆ "




**ಸಂಪಾದಕ :**
ಕೊಂಡಜ್ಜಿ ಕೆ. ವೆಂಕಟೇಶ್
ಎಂ.ಎ., ಬಿ.ಕಾಂ.

ಮುದ್ರಕರು :
ಕೊಂಡಜ್ಜಿ ಮುದ್ರಣ
205, 7ನೇ ಅಡ್ಡರಸ್ತೆ
ಮೊದಲ (ಎನ್) ಬ್ಲಾಕ್,
ರಾಜಾಜಿನಗರ,
ಬೆಂಗಳೂರು–560 010

' ಸಾಮಾನ್ಯಜ್ಞಾನ '
(ಕನ್ನಡ ಶೈಕ್ಷಣಿಕ ಪತ್ರಿಕೆ)
೨೦೫, ಒಂದನೇ (ಎನ್) ಬ್ಲಾಕ್
೭ನೇ ಅಡ್ಡರಸ್ತೆ, ರಾಜಾಜಿನಗರ
ಬೆಂಗಳೂರು–೫೬೦ ೦೧೦
ದೂರವಾಣಿ : 324612

Regd. No.
RN 36649/82


## ಜಿಲ್ಲಾ ಪರಿಷತ್ತು ಮತ್ತು ಮಂಡಲ ಪಂಚಾಯಿತ್ತಿ

ಗಾಂಧೀಜಿ ಕನಸನ್ನು ನನಸಾಗಿಸುವ
ಹುಟ್ಟಿನಿಂದ ಅಧಿಕಾರವನ್ನು ಜನತೆಗೇ ನೀಡುವುದೆಂದು
ಜಿಲ್ಲಾ ಪರಿಷತ್ತು ಮತ್ತು ಮಂಡಲ ಪಂಚಾಯ್ತಿಗಳನ್ನು
ಸ್ಥಾಪಿಸಿದ್ದಾಯ್ತು. ಆದರೆ ಅದರ
ಪರಿಣಾಮ ಭೀಕರ. ಅಭಿವೃದ್ಧಿಯಾಗುವುದರ
ಬದಲು ಗ್ರಾಮೀಣ ವಾತಾವರಣ
ಹಾಳಾಗುತ್ತಿದೆ. ಹೆಂಡ, ಕೀಳು ರಾಜಕೀಯ,
ಪರಸ್ಪರ ಪೈಪೋಟಿ, ಮತ್ಸರ
ಬೆಳೆದು ರಾಡಿಯಾಗಿಬಿಡುತ್ತಿದೆ
ಇಂದು ನಮ್ಮ ಗ್ರಾಮೀಣ ಪರಿಸರ.

ಗ್ರಾಮೀಣ ಜನತೆಗೆ ಸೂಕ್ತ ತರಬೇತಿ,
ಶಿಕ್ಷಣ–ಶಿಸ್ತು ಪ್ರಾಮಾಣಿಕತೆ ಅಗತ್ಯವಾಗಿರುವ
ಇಂದಿನ ಸ್ಥಿತಿಯಲ್ಲಿ ಗಾಂಧೀವಾದ ಹೆಚ್ಚು
ಪರಿಣಾಮಕಾರಿಯಾಗಿ ಬಿತ್ತರಗೊಳ್ಳಬೇಕಾಗಿದೆ.

**—ಸಂಪಾದಕ**

ಮಾಸ ಚಿಂತನ....

# ಜಾತಿ ಜಾತಿಗಳಲ್ಲಿ ಐಕ್ಯ

೧ ದೇಶದ ಬೇರೆ ಬೇರೆ ಜಾತಿಗಳಲ್ಲಿ ಐಕ್ಯವೂ ಸಮಾಧಾನ ಶಾಂತಿಗಳೂ ಉಂಟಾಗುವವರೆಗೆ ಸ್ವರಾಜ್ಯವನ್ನು ದೊರಕಿಸುವುದೂ ಅದನ್ನು ಕಾಯ್ದಿಟ್ಟು ಕೊಳ್ಳುವುದೂ ಅಶಕ್ಯ.

೨ ಈ ಐಕ್ಯವಾಗಬೇಕಾದರೆ ಸ್ವರ ಜಾತಿಗಳಲ್ಲಿ ಮುಕ್ತವಾದ ಭೋಜನದ, ವಿವಾಹದ ವ್ಯವಹಾರವಾಗಲೇಬೇಕು. ಇಲ್ಲವೆ ಜಾತಿ – ಜಾತಿಗಳ ನಡುವಿನ ಭಿನ್ನ ಧರ್ಮ ಸಂಸ್ಕೃತಿಗಳ ಭೇದವು ಇಲ್ಲದಂತಾಗಬೇಕು. ಯಾವುದಾದರೊಂದೇ ಧರ್ಮವನ್ನವ ಲಂಬಿಸಿ, ಅಥವಾ ಧರ್ಮಗಳನ್ನೆಲ್ಲ ತೊರೆದ, ಒಂದೇ ಸಂಸ್ಕೃತಿಯನ್ನು ನಿರ್ಮಿಸ ಬೇಕೆನ್ನುವುದು ಸರಿಯಲ್ಲ. ಆದು ಇಷ್ಟವಾದುದೂ ಅಲ್ಲ. ಪ್ರತಿಯೊಂದು ಜಾತಿಯೂ ತನ್ನ ವೈಶಿಷ್ಟ್ಯವನ್ನು ಕಾಪಾಡಿಕೊಂಡು ಸಹಿಷ್ಣುತೆಯ ಮೂಲಕ ಐಕ್ಯವನ್ನುಂಟು ಮಾಡಿಕೊಳ್ಳಬೇಕು.

೩ ಆದರೆ ಈ ಐಕ್ಯಕ್ಕಾಗಿ ಬಹು-ಸಂಖ್ಯೆಯ ಜಾತಿಗಳು ಅಲ್ಪ ಸಂಖ್ಯೆಯವು ಗಳಿಗೆ ಅಭಯವನ್ನೀಯಬೇಕು. ನ್ಯಾಯಕ್ಕೂ ಸಾರ್ವಜನಿಕ ಹಿತಕ್ಕೂ ವಿರೋಧ ವಾಗದ ಹಾಗೆ ಅಲ್ಪಸಂಖ್ಯೆಯ ಜಾತಿಗಳಿಗೆ ಧರ್ಮ, ಭಾಷೆ, ಸಾಹಿತ್ಯ, ಜಾತಿಗಳ ಕಟ್ಟು–ಕಟ್ಟಳೆ, ನಡತೆ-ನಡಾವಳಿ, ಶಿಕ್ಷಣ, ಅರ್ಥವ್ಯಾಪ್ತಿ ಮುಂತಾದವುಗಳ ಬಗ್ಗೆ ತೊಂದರೆಯಾಗಗೊಡದಿರುವುದೇ ಬಹು ಸಂಖ್ಯೆಯ ಜಾತಿಗಳ ಗುರಿಯಾಗಿರಬೇಕು. ಬಹು–ಸಂಖ್ಯೆಯ ಜಾತಿಗಳು ತಮ್ಮ ಹಿತಚಿಂತಕವಿರುವವೆಂದು ಅಲ್ಪ-ಸಂಖ್ಯೆಯ ಜಾತಿಗಳಲ್ಲಿ ನಂಬಿಗೆ ಹುಟ್ಟಿಸಬೇಕು.

೪ ಬಹು-ಸಂಖ್ಯೆಯ ಜಾತಿಗೆ ಅಲ್ಪ-ಸಂಖ್ಯೆಯ ಜಾತಿಯ ಭಯ ಉಂಟಾದರೆ ಅದು ಈ ಕೆಳಗಿನ ಯಾವುದೊಂದು ಸ್ಥಿತಿಯನ್ನು ಸೂಚಿಸುವುದು :

(೧) ಬಹು-ಸಂಖ್ಯೆಯ ಜಾತಿಯ ಜೀವನದಲ್ಲಿ ಹುಳುಕು ಇದೆ, ಇಲ್ಲವೆ ಅದು ಹೇಡಿಯಾಗಿದೆ, ಹಾಗು ಅಲ್ಪ--ಸಂಖ್ಯೆಯ ಜಾತಿಗೆ ಪಶುಬಲದ ಹೆಮ್ಮೆ ಇರುವುದು. (ಹೆಮ್ಮೆಯು ರಾಜಸತ್ತೆಯಿಂದಾಗಲಿ ಸ್ವತಂತ್ರವಾಗಿಯಾಗಲಿ ಇರಬಹುದು).

(೨) ಬಹು–ಸಂಖ್ಯೆಯ ಜಾತಿಯಿಂದ ಯಾವುದಾದರೊಂದು ಅನ್ಯಾಯವಾಗುತ್ತಿರ ಬೇಕು; ನಿರಾಶೆಯಿಂದ ಹಂಗುದೊರೆದು ಸಾಯುವ ವ್ಯಕ್ತಿಯು ಅಲ್ಪ–ಸಂಖ್ಯೆಯ ಜಾತಿಯಲ್ಲಿ ಬಂದಿರಬೇಕು. ಇವೆರಡಕ್ಕೂ ಇರುವ ಉಪಾಯ ಒಂದೇ ಒಂದು: ಬಹುಸಂಖ್ಯೆಯ ಜಾತಿಯ ಸತ್ಯಾಗ್ರಹದ ಸಿದ್ಧಾಂಗಳ ಮೇರೆಗೆ ತನ್ನ ಜೀವನವನ್ನಿಡು ವುದು, ಸತ್ಯಾಗ್ರಹಿಯಾಗಿ ಎಷ್ಟು ಬೆಲೆಯಾದರೂ ಕೊಟ್ಟು ಅನ್ಯಾಯವನ್ನು ದೂರ ಮಾಡುವುದು, ತನ್ನ ಹೇಡಿತನವನ್ನು ಬಿಸುಟು ಅಲ್ಪ-ಸಂಖ್ಯೆಯ ಜಾತಿಯ ಪಶುಬಲ ವನ್ನು ಸತ್ಯಾಗ್ರಹದಿಂದ ಗೆಲ್ಲುವುದು.

—ಮಹಾತ್ಮಾ ಗಾಂಧೀಜಿ



ಕ. ವೆಂ. ರಾಜಗೋಪಾಲ

# ಕವಿ ಕ. ವೆಂ.

ಕ. ವೆಂ. ರಾಜಗೋಪಾಲ ನಮ್ಮ ಕಾಲದ ಪ್ರಬುದ್ಧ ಕವಿಗಳು ಮತ್ತು ಕಥೆಗಾರರು. ಎಂ.ಇ.ಎಸ್. ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ ಪ್ರಿನ್ಸಿಪಾಲರಾಗಿ ಜೊತೆಗೆ ಒಳ್ಳೆಯ ಸ್ನೇಹಿತರಾಗಿ, ಅಲ್ಲದೇ ನಾಟಕಕಾರರಾಗಿ, ಸಂಶೋಧಕರಾಗಿ ಹಾಗೂ ವಿಮರ್ಶಕರಾಗಿ ನಮಗೆಲ್ಲಾ ಪರಿಚಿತರು. ಅವರು ಹಲವಾರು ಗ್ರಂಥಗಳನ್ನು ರಚಿಸಿದ್ದಾರೆ. ಸುಮಾರು 1969–70ರಲ್ಲಿ ಸಂಶೋಧನೆ ನಡೆಸಿ ರಚಿಸಿರುವ 'ಬೌದ್ಧಧರ್ಮದಲ್ಲಿ ಯಕ್ಷ ಕಲೆ' ಈ ಗ್ರಂಥ ಪ್ರಕಟವಾಗದೆಯೇ ಇನ್ನೂ ಹಾಗೆಯೇ ಉಳಿದಿದೆ. ಒಂದು ವಿದ್ಯಾಸಂಸ್ಥೆಯೋ ಅಥವಾ ವಿಶ್ವವಿದ್ಯಾಲಯವೋ ಈ ಗ್ರಂಥವನ್ನು ಮುದ್ರಿಸಬೇಕಾಗಿತ್ತು. ಇಂದಿಗೂ ಆ ಗ್ರಂಥ ಪ್ರಕಟವಾದರೆ ಯಕ್ಷಕಲೆ ಬಗ್ಗೆ ಜಿಜ್ಞಾಸುಗಳಿಗೆ ಉಪಯುಕ್ತ ಗ್ರಂಥವಾದೀತು. ಅವರ ನದಿಯ ಮೇಲಿನ ಗಾಳಿ ಕವನ ಸಂಕಲನ ಉತ್ತಮ ಕವನಗಳಿಂದ ಕೂಡಿದೆ. 'ಬೆಡಗಿನ ಬಿನ್ನಾಣವನ್ನು ಕಂಡು, ಈ ನಾಟಕ (ಅಪ್ರಕಟಿತ) ಒಳ್ಳೆಯ ನಾಟಕವಾಗಿದೆ. ಸಂಶೋಧನ ಕೇಂದ್ರಗಳಲ್ಲೋ, ಅಕಾಡಮಿಗಳಲ್ಲೋ ಅವರಿಗೆ ಯೋಗ್ಯ ಸ್ಥಾನ ಇನ್ನೂ ದೊರೆಯದಿರುವುದೇ ವಿಷಾದದ ಸಂಗತಿ.

ಕ. ವೆಂ. ನಮ್ಮ ಕಾಲದ ಮಾನವೀಯ ಧೋರಣೆಯುಳ್ಳ ಕವಿ. ಸುಮಾರು ಎರಡೂವರೆ ದಶಕಗಳ ಹಿಂದೆ ರಚಿಸಿದ್ದ ಕೆಲವು ಗೀತೆಗಳನ್ನು ಸಾಮಾನ್ಯಜ್ಞಾನ 1990ರ ಮೇ ಸಂಚಿಕೆಯಲ್ಲಿ ಪ್ರಕಟಿಸಿದ್ದೇವೆ. ಓದುಗರು ಸ್ವೀಕರಿಸುತ್ತಾರೆಂದು ನಂಬಿದ್ದೇವೆ.

## ಕ. ವೆಂ. ಕೃತಿಗಳು

**೧. ಕಥೆಗಳು :**

ಎಣಿಸದ ಹಣ
ರಾಗಜಯಂತಿ
ಅನಾಥ ಮೇಷ್ಟರ ಸ್ವಗತ ಸಂಪ್ರದಾಯ
ಆಯ್ದ ಕತೆಗಳು

**೨. ಕವಿತೆ :**

ಅಂಜೂರ
ನದಿಯ ಮೇಲಿನ ಗಾಳಿ
ಮೇ ತಿಂಗಳ ಒಂದು ಅಬ್ಬರ

**೩. ನಾಟಕ :**

ಕೋರಿಯೋಲೆನಸ್
ಹಿಮಗಿರಿಯ ಕರೆ ಮತ್ತು ಅತ್ರೆಯ ಕಾಂಜಿ
ಬೆಡಗಿನ ಬಿನ್ನಾಣವನ್ನು ಕಂಡು (ಅಚ್ಚಿನಲ್ಲಿ)

**೪. ಸಂಶೋಧನೆ :**

'ಬೌದ್ಧ ಮತದಲ್ಲಿ ಯಕ್ಷಕಲೆ (ಅಪ್ರಕಟಿತ)

—ಸಂ.

# ಹಿಂದಿ ಚೀನಿ ಭಾಯಿ ಭಾಯಿ !

ಕ. ವೆಂ. ರಾಜಗೋಪಾಲ

ನನ್ನ ಮಾತನ್ನಿಷ್ಟು ಕೇಳು ಚೀನೀ ಭಾಯಿ;
ಎದೆಯ ಮೈಕನ್ನು ಹಿಡಿದು ಚೀರಿಕೊಳ್ಳುತಿದೆ ಬಡಜೀವ
ಪಂಚಶೀಲದ ಮದ್ದು ನಿನ್ನ ಮೈಗಂಟಲಿಲ್ಲ
ಸಿಡಿಗುಂಡಿನಿಂದ ನನ್ನೆಡೆಗೆ ಗುರಿಯಿಡಲು ಹಿಂಜರಿಯಲಿಲ್ಲ
ನಿನ್ನೆದೆಯೊಳಗೆ ಡ್ರೇಗನ್ ರೋಗದ ನೋವ
ನಾ ತಿಳಿದು ಹೇಳುವೆ ಕೇಳು; ಬುದ್ಧನಿಲ್ಲದೆ, ಸೋಲು ನಿನ್ನ ತಾಯಿ

ಹಿಮಗಿರಿಯ ತುದಿಯಲ್ಲಿ ನಮ್ಮಜ್ಜನ ಮನೆಯಿದೆ
ಆದರಾಚೆಗೇ ನಿನ್ನ ಮನೆ ಮಠ ಗೋವು ಹೊಲ ಬಯಲು ಕಾಣೆ
ತಲೆತಲಾಂತರದ ನೆಮ್ಮದಿಯ ನೀನು ತೂರಿ
ಮಾಯಾ ಜಾಲಕ್ಕೆ ಬೆಂಕಿಯುಗುಳುವ ಜಾಣತನವ ಮಾರಿ
ಕೊಳ್ಳಿದೆವ್ವದ ಹಾಗೆ ಕುಣಿದಾಡಿದರೆ, ಏಣಿ
ಜಾರಿದ ಮೇಲೆ ಕೆಟ್ಟು ಬದುಕಿದೆಯೆಂದು ಬಿದ್ದೆದ್ದು ನಗಬಾರದೆ ?

ಧರ್ಮ ಬಂಧುಗಳು ನಾವು, ನನ್ನ ನಿನ್ನ ಮನೆ
ನಡುವೆ ಓಣಿಯು ತುಂಬ ನೆತ್ತರಿನ ಝರಿ ಹರಿಯಲೇಕೆ ?
ಎರಡು ಹೃದಯದ ಬೆಸಗೆ ಕಬ್ಬಿಣದ ಬರೆಯಾಗಿ
ತಲೆತಲಾಂತರದ ನೆನಪು ಹಸಿಬಿಸಿಯ ಮಾಯದಾ ಗಾಯವಾಗಿ
ಬಂಧು ಬಂಧುವ ಕೊಂದು ಸಮಾಧಿಗಳು ನುಡಿಯಬೇಕೆ ?
ಇರುವ ಬುದ್ಧಿಯನ್ನೆಲ್ಲ ಗುಂಡಿಟ್ಟು ಸುಟ್ಟು ನೋಡಬೇಕೇನು
ನಾನು ನೀನೇ

ಹೃದಯ ಡ್ರೇಗನ್ನಾಗಿ ಮನಸ್ಸು ಕಗ್ಗವಿಯಾಗಿ
ನಿನ್ನಾಸೆ ಮೈಕೊಡವಿ ನಿಂತು ಕೆಂಗಣ್ಣಿನಲಿ ಜ್ವಾಲೆಯುಗುಳಿ
ಮಾನವನ ಬಿಸಿರಕ್ತ ಹೆಪ್ಪಾಗುವಂತೆ ಬಾಯಿ ತೆರೆದು ಬಂದು
ನನ್ನಾಸೆಗಳ ರಾಸಿ ಹಿಮಗಿರಿಯಾಗಿ ಹಗಲಿರುಳು ಬೆಳೆದು ನಿಂತದ್ದು
ಕರಗಿ ನೀರಾಗಿ ಹರಿದು ನಮ್ಮ ಸಮಾಧಿಗಳ
ತೊಳೆಯುವುದ ಕಂಡ ಜಗವೆಲ್ಲ ಕಣ್ಣೀರ ಬಿಡಬಹುದೆನುವೆ ಕೂಗಿ

ಇನ್ನಾದರೂ ಕೇಳು ಓ ನನ್ನ ಚೀನೀ ಭಾಯಿ
ನಿನ್ನ ಸಿಂಹಾಸನದ ಡ್ರೇಗನ್ನು ನಮ್ಮ ಮೆದುಳ ತಿಂದು ತೇಗಿ
ಉಳಿದ ಮಸಣದಲಿ ಮಣ್ಣು ಮುಕ್ಕುವ ಸಮಯ
ಕಣ್ಣಿಲ್ಲದ ಸಾವಿನ ಹಲ್ಲಿಗಿಳಿವ ರುಚಿ ಕಹಿ ವಿಷವು ಕೇಳಯ್ಯ
ಮಸಲ, ಗೆದ್ದೆವೆನ್ನುವ ಧೈರ್ಯ ನಿನ್ನದಾಗಿ
ಇಬ್ಬರೂ ಕೆಟ್ಟು ಕಡೆಗೆ ಕುಳಿತಲ್ಲೆ ಬಾಯಿ ಬಡಕೊಳ್ಳುವ ಗತಿ
ಬಂದೀತು ಭಾಯಿ !

## ಚೆಲುವೆಯ ಪದ

ಚೆಂದುಳ್ಳಿ ಚಲುವಕ್ಕ
ಚೆಂದನದ ಬೊಂಬಕ್ಕ
ನಿಂದೀರೆ ನನ್ನಕ್ಕ ನೀರಿಗೆ ಬಂದೇನು
ಬಿಂದಿಗೆ ತಂದೇನು ಬೇಗಾನೇ ಬಂದೇನು ॥ ಪ ॥

ಬೆಳ್ಳುಳ್ಳಿ ಚೆಂದಿರನ
ಬೆಳ್ಳಿಯ ನಗೆಚೆಲ್ಲಿ
ಚೆಂಚಾಲ ಚೆಲ್ಲ್ಯಾದ ಬೆಳದಿಂಗಳೆರಚ್ಯಾದೆ
ದನಕರಿಗೆ ನೀರಿಲ್ಲ ನೀರಿಗೆ ಬಂದೇನು
ಬಿಂದಿಗ ತಂದೇನು ಬೇಗಾನೆ ಬಂದೇನು ॥

ತಿಂಗಾಳು ಬೆಳಗ್ಯಾದೆ
ತಂಗಾಳಿ ತೂಗ್ಯಾದೆ
ತಂಪೀನ ಇರುಳಾಗೆ ಸಂಪೀಗೆ ಅರಳ್ಯಾವೆ
ಸಂಪೀಗೆ ಮುಡಿದಿವ್ನಿ ನಿಂದೀರೆ ನನ್ನಕ್ಕ
ಬಿಂದಿಗೆ ತಂದೇನು ಬೇಗಾನೆ ಬಂದೇನು ॥

ಸಂಪೀಗೆ ಕೆಂಪೀಗೆ
ಸೊಪ್ಪಾದೆ ನನ್ನಕ್ಕ
ಬಂದಾನು ಜೋರಾಮ ತಡೆದಾನು ಹಾದ್ಯಾಗೆ
ಕಂಡವನೆ ಅಂದೊಮ್ಮ ನಿಂದೀರೆ ನನ್ನಕ್ಕ
ಬಿಂದಿಗೆ ತಂದೇನು ಬೇಗಾನೆ ಬಂದೇನು ॥

ಕಟ್ಟೇಯ ಹಾದೀಲಿ
ಕಣ್ಣಿಟ್ಟು ಇರತಾನ
ಕೊಳಲಿಽನ ದನಿಯಾಗೆ ಕರೆಯಾಂವ ನನ್ನಾವ
ಬೆಂಬತ್ತಿ ಬಂದಾನು ನಿಂದೀರೆ ನನ್ನಕ್ಕ
ಬಿಂದಿಽಗೆ ತಂದೇನು ಬೇಗಾನೆ ಬಂದೇನು ॥

ಒಬ್ಬಽಳೆ ಬೆದರಿವ್ನಿ
ಕಳ್ಳಾನ ನೆಳಲಿಽಗೆ
ಬಿಂದಿಽಗೆ ಹೊರೆ ಹೊತ್ತು ಬರಲಾರೆ ಬಿರಬಿರ್ನೆ
ನಿನ್ನೊಡನೆ ಬಂದೇನು ನಿಂದೀರೆ ನನ್ನಕ್ಕ
ಬಿಂದಿಽಗೆ ತಂದೇನು ಬೇಗಾನೆ ಬಂದೇನು ॥

ಬಿಂದೀಗೆ ಹೊರೆಹೊತ್ತು
ಬೇಡೂವೆ ದೇವಽರ
ಬೇಡಿಽಕೆ ಸಲಿಸವನೆ ಬಿಳಗಿಽರಿ ರಂಗಽ
ಬಿಳಗಿಽರಿ ರಂಗಾನ ಬೇಡೂತ ಬಂದೇನು
ಬಿಂದೀಗೆ ತಂದೇನು ಬೇಗಾನೆ ಬಂದೇನು ॥

## ಮಳೆರಾಯನ ಪದ

ಬಾರಯ್ಯ ಮಳೆರಾಯಽ ಬಾರೊ ಘಟ್ಟದ ರಾಯ
ಬಾರೊ ಚೆನ್ನಿಗರಾಯ ಬಾರಯ್ಯ ॥ ಪ ॥

ಬೆಟ್ಟ ಬೇಸಗೆ ಬೇಗೆ, ಸುಟ್ಟ ತಾಯಿಯ ಎದೆ—
ಯಾಸೆ ಹಿಂಗದೊ, ಮುಂಚೆ ಬಾರಯ್ಯ :
ಬಾರಯ್ಯ ಮಳೆರಾಯಽ, ಬಾರೊ ಚೆನ್ನಿಗರಾಯ ಬಾರಯ್ಯ ॥

ನೂರು ಕಳಸದ ಮೇಲೆ, ಗಾಳಿರಾಯನ ಆಟ—
ಹಾಸ ಹೊಮ್ಮಿದೆ, ಮೆಟ್ಟಿ ಬಾರಯ್ಯ :
ಬಾರಯ್ಯ ಮಳೆರಾಯಽ, ಬಾರೊ ಚೆನ್ನಿಗರಾಯ ಬಾರಯ್ಯ ॥

ಘಟ್ಟವಿಳಿದು ಬಾರೊ, ಪಟ್ಟು ತೋರುತ ಬಾರೊ
ಬಡತನದುಸಿರು, ಜಟ್ಟಿ ಬಾರಯ್ಯ :
ಬಾರಯ್ಯ ಮಳೆರಾಯ, ಬಾರೊ ಚೆನ್ನಿಗರಾಯ ಬಾರಯ್ಯ ॥

ಬಣ್ಣದುಡಿಗೆಯುಟ್ಟು, ಕೋರೆ ರೂಮಾಲಿಟ್ಟು
ಹೊನ್ನ ಹಾವಿಗೆ, ಮೆಟ್ಟಿ ಬಾರಯ್ಯ :
ಬಾರಯ್ಯ ಮಳೆರಾಯ, ಬಾರೊ ಚೆನ್ನಿಗರಾಯ ಬಾರಯ್ಯ ॥

ಮುಗಿಲ ಮಾಳಿಗೆ ಬಿಟ್ಟು, ಕಡಲಿನಾಸರೆ ಬಿಟ್ಟು
ನಡೆಮುಡಿ ನೆಲ ಮುಟ್ಟಿ ಬಾರಯ್ಯ :
ಬಾರಯ್ಯ ಮಳೆರಾಯ, ಬಾರೊ ಚೆನ್ನಿಗರಾಯ ಬಾರಯ್ಯ ॥

ಗಾಳಿ ಗೂಳಿಯನೇರಿ, ಸಿಡಿಲ ಬಿಲ್ಲಿಗೆ ಹೂಡಿ
ಬೆಡಗು ಮಿಂಚಿನ ರಾಯ ಬಾರಯ್ಯ :
ಬಾರಯ್ಯ ಮಳೆರಾಯ, ಬಾರೊ ಚೆನ್ನಿಗರಾಯ ಬಾರಯ್ಯ ॥

ಸುಗ್ಗಿ ಗೆಜ್ಜೆಯ ನಾದ, ಸಜ್ಜೆವೆಣ್ಣಿನ ಮೋದ
ಬಡವ ರೈತನ ಸಿರಿಯೆ ಬಾರಯ್ಯ :
ಬಾರಯ್ಯ ಮಳೆರಾಯ, ಬಾರೊ ಚೆನ್ನಿಗರಾಯ ಬಾರಯ್ಯ ॥

ಬಿತ್ತದಾಸೆಯ ಹೊರೆ ಹೊತ್ತ ಜೀವದ ದೊರೆ
ಎತ್ತಿ ಕೈ ಮುಗಿಯುವೆ ಬಾರಯ್ಯ :
ಬಾರಯ್ಯ ಮಳೆರಾಯ, ಬಾರೊ ಚೆನ್ನಿಗರಾಯ ಬಾರಯ್ಯ ॥

ನಮ್ಮ ಬಾಳಿನ ದೊರೆ ಬಿಳಿಗಿರಿ ರಂಗನ ಸಿರಿಯೆ
ಹರಿಕಾರ ಭೂಮಿಗೆ ಬಾರಯ್ಯ :
ಬಾರಯ್ಯ ಮಳೆರಾಯ, ಬಾರೊ ಚೆನ್ನಿಗರಾಯ ಬಾರಯ್ಯ ॥

0 0 0 0

# ಚರಮಗೀತೆ

ನಾ ಹೆಂಗೆ ಮರೆಯ್ಯಲಿ ನಿನ್ನ
ಹೆಂಗೆ ಹೆಂಗೆ ಹೆಂಗೆ ಮರೆಯಲಿ ನಿನ್ನ

ಚಂದುಳ್ಳಿ ಮೊಗದೋಳೆ
ಚಂದಿರನ ನಗೆಯೋಳೆ
ಚಿಗರಿಯ ಮರಿ ಹಂಗೆ ಚಕ ಚಕ ಜಿಗಿಯೋಳೆ
ಚಕ ಚಕ ಜಿಗಿಯೋಳೆ ನಿನ್ನಂತ ಚದುರೆಯ ನಾ ಹೆಂಗೆ ಮರೆಯಲೆ ೧

ಕೋಗಿಲೆಯ ದನಿಯೋಳೆ
ಕಣ್ಣಲ್ಲೆ ಕರೆಯೋಳೆ
ಕಬ್ಬಿನ ರಸವನ್ನ ದನಿಯಾಗೆ ಬೆರಸೋಳೆ
ದನಿಯಾಗೆ ಸುರಿಸೋಳೆ ನಿನ್ನಂತ ಚದುರೆಯ ನಾ ಹೆಂಗೆ ಮರೆಯಲೆ ೨

ಮಲ್ಲಿಗೆ ಮುಡಿಯೋಳೆ
ಮೆಲ್ಲಾಗೆ ನುಡಿಯೋಳೆ
ಮೆಲ್ಲನೆ ನಡೆಯಾಗೆ ಮುನಿದಂಗೆ ನಲಿಯೋಳೆ
ಮುನಿದ್ಹಾಗೆ ಒಲಿಯೋಳೆ ನಿನ್ನಂತ ಚದುರೆಯ– ನಾ ಹೆಂಗೆ ಮರೆಯಲೆ ೩

ಗಾಳಿಗೆ ಬಳುಕೋಳೆ
ಬಳುಕಿಗೆ ಬಾಗೋಳೆ
ಒಯ್ಯಾರಿ ಒಲಿದೊಮ್ಮೆ ಮೈದೋರಿ ಬರುವೋಳೆ
ಒಲಿದೊಮ್ಮೆ ಬರುವೋಳೆ ನಿನ್ನಂಥ ಚದುರೆಯ – ನಾ ಹೆಂಗೆ ಮರೆಯಲಿ ೪

ಕನಸಾಗೆ ಬರುವೋಳೆ
ನನಸಾಗೆ ನಿಂದೋಳೆ
ಕನಸಾಗೆ ನಿಂತಿದ್ದಿ ಕುಲಕುಲನೆ ನಗುತಿದ್ದಿ
ಕನಸಾಗೆ ನಗುತಿದ್ದ ನಿನ್ನಂಥ ಚದುರೆಯ – ನಾ ಹೆಂಗೆ ಮರೆಯಲೆ ೫

ಅಂದೊಮ್ಮೆ ಅಂದಂತೆ
ಬಂದಂತೆ ಬಾ ಗೆಳತಿ
ಬರಿದಾದ ಬಾಳಿಗೆ ಭಾಗ್ಯಾದ ಸಿರಿದೇವಿ
ಬಾಳಿಗೆ ಸಿರಿದೇವಿ ನಿನ್ನಂಥ ಚದುರೆಯ – ನಾ ಹೆಂಗೆ ಮರೆಯಲೆ ೬

ಬರಲಾತೆ ನೀ ರಂಗಿ
ಬೇಡೇನು ನಾ ರಂಗ
ಬಿಳಗ್ರಿರಿ ರಂಗನ ಬೇಡೂತ ನಿಂದೇನು
ಬೇಡೂತ ನಿಂದೇನು ನಿನ್ನಂಥ ಚದುರೆಯ – ನಾ ಹೆಂಗೆ ಮರೆಯಲೆ ೭

0 0 0 0

# ಒಂದು ಹಾಡು

ಹಂಗಲ್ಲ ಹಿಂಗಲ್ಲ ಹೆಂಗಾಯ್ತು ನೋಡು
ಹಾಳೂರ ಬಯಲಲ್ಲಿ ಬಾಳಿಲ್ಲ ನೋಡು ॥ಪ॥

ಚೆಂಪೋರೆ ಮೋಗಡೆ ಚಂದುಳ್ಳಿ ಊರಿತ್ತು
ಚಂದುಳ್ಳಿ ಊರಿತ್ತು
ಚಂದುಳ್ಳಿ ದೇವಿಯ ಅಂಗಳ ನೋಡು
ಮೂಡಲ ಪಡುವಲ ಮಡಿಲಲ್ಲಿ ನೋಡು — ೧

ಮೂಡಲ ಮಲಲ್ಲಿ ಮೂಡಿದ ಸ್ವಾಮಿ
ಮೂಡಿದ ಸ್ವಾಮಿ
ಮಲ್ಲಿಗೆ ಮೊಗವ ತೆರೆದಾವೆ ನೋಡು
ಮಲ್ಲಿಗೆ ನಗುತಾವೆ ಗಾಳಿಗೆ ಒಲಿದವೆ — ೨

ಮಲ್ಲಿಗೆ ನಗುತಾವೆ ಮೆಲ್ಲಗೆ ದನಿಗೊಟ್ಟು
ಮೆಲ್ಲಗೆ ದನಿಗೊಟ್ಟು
ನಲ್ಲೇರ ಮುಡಿಯನ್ನ ಬಯಸಾವೆ ನೋಡು
ನಲ್ಲೇರ ಬಯಸಾವೆ ಮುಸಿ ಮುಸಿ ಕೊರಗವೆ — ೩

ನಲ್ಲೇರ ಬಯಸಾವೆ ಕಂಬನಿ ಸುರಿಸಾವೆ
ಕಂಬನಿ ಸುರಿಸಾವೆ
ಸ್ವಾಮಿಗೆ ಬೆದರವೆ ಉದಿರಾವೆ ನೋಡು
ಸ್ವಾಮಿಗೆ ನಡುಗಾವೆ ತಾಯಿಯ ನಂಬವೆ — ೪

ಸ್ವಾಮಿಗೆ ನಡುಗsವೆ ಭೂದೇವಿ ನೊಲಿದsವೆ
ಭೂದೇವಿ ನೊಲಿದಾsವೆ
ತಾಯಿsಯ ಮನದಲ್ಲಿ ನೆನೆದsವೆ ನೋಡು
ತಾಯಿsಯ ತಮ್ಮಲ್ಲಿ ಕಂಡಂಗೆ ಹೊರಳಾsವೆ — ೫

ತಾಯಿsಯ ತಮ್ಮಲ್ಲೆ ಕಂಡಂಗೆ ಹೊರಳಾsವೆ
ಕಂಡಂಗೆ ಹೊರಳsವೆ
ಮೂಲೋಕ ದೊಡೆಯsನ ಬೇಡsವೆ ನೋಡು
ಬಿಳಗಿsರಿ ರಂಗsನ ಬೇಡೂತ ಬಿದ್ದsವೆ — ೬

ಬಿಳಗಿsರಿ ರಂಗsನ ಬೇಡೂತ ಬಿದ್ದsವೆ
ಬೇಡೂತ ಬಿದ್ದsವೆ
ಹಾಳೂರ ಬಯಲಲ್ಲಿ ಬೆಳ್ಳಿsಯು ನೋಡು
ಹಾಳೂರ ಬೆಳ್ಳಿಯುs ಕೊಳ್ಳುವೆಯು ಕೇಳು — ೭

0 0 0 0

(ಕವಿ ಕ.ವೆಂ. ರಾಜಗೋಪಾಲರು ಈಗ್ಗೆ ಸುಮಾರು ಎರಡೂವರೆ ದಶಕಗಳ ಹಿಂದೆ ಬರೆದ ಪದಗಳನ್ನು ಸಾಮಾನ್ಯಜ್ಞಾನ ಮೇ ಸಂಚಿಕೆಯಲ್ಲಿ ಪ್ರಕಟಿಸಲಾಗಿದೆ. ಬೆಳಕಿಗೆ ಬಾರದ ಈ ಅಪೂರ್ವ 'ಪದರತ್ನ'ಗಳನ್ನು ಸಾಮಾನ್ಯಜ್ಞಾನ ತನ್ನ ಓದುಗರಿಗೆ ನೀಡಿದೆ. —ಸಂ.)

# ಸ್ವದೇಶಿ

೧ ಶಾರೀರಿಕ ಪರಿಶ್ರಮದ ಸಿದ್ಧಾಂತದಿಂದಲೆ ಸ್ವದೇಶೀ ಧರ್ಮವು ಹುಟ್ಟುವುದು.

೨ ಅಸ್ತೇಯ ಮತ್ತು ಅಪರಿಗ್ರಹದ ಗುರಿಯನ್ನಿಟ್ಟುಕೊಂಡ ಮನುಷ್ಯನು ಅನ್ಯರ ಪರಿಶ್ರಮದ ಉಪಭೋಗವನ್ನು ಕ್ವಚಿತ್ತಾಗಿ ಮಾಡುವನು. ಅಡಿಗೆ ಮಾಡುವುದು, ಬಟ್ಟೆ ಒಗೆಯುವುದು, ಮಲ ಮೂತ್ರ ಸ್ವಚ್ಛ ಮಾಡುವುದು, ಪಾತ್ರೆ ತಿಕ್ಕುವುದು, ಕ್ಷೌರ ಮಾಡಿಕೊಳ್ಳುವುದು, ಕಸಗೂಡಿಸುವುದು, ಮುಂತಾದ ಕಾರ್ಯಗಳು ಕೀಳೆಂದು ಬಗೆದು ಎರಡನೆಯವರಿಂದ ಮಾಡಿಸಿಕೊಳ್ಳಬಾರದು. ಇವುಗಳನ್ನು ಮಾಡಿಸಿಕೊಳ್ಳುವುದರಲ್ಲಿಯೇ ಸ್ವಾಭಿಮಾನವೂ ಪ್ರತಿಷ್ಠೆಯೂ ಇರುವುದೆಂದು ತಿಳಿದುಕೊಳ್ಳಕೂಡದು. ತಾನು ಅಶಕ್ತನಿದ್ದಾಗ, ಗೆಳೆಯರು ಪ್ರೇಮದಿಂದ ಮಾಡಿದರೆ, ಇಲ್ಲವೆ ಕೆಲವರು ಸೇರಿ ಹಂಚಿಕೊಂಡು ಕೆಲಸ ಮಾಡುವಾಗ ಈ ಕಾರ್ಯಗಳನ್ನು ಅನ್ಯರಿಂದ ಮಾಡಿಸಿಕೊಳ್ಳಬಹುದು. ಆದರೆ ಇವುಗಳಲ್ಲಿ ಒಂದು ಕೆಲಸ ದೊಡ್ಡದು, ಇನ್ನೊಂದು ಚಿಕ್ಕದು; ಒಂದು ಕೀಳು, ಇನ್ನೊಂದು ಮೇಲು; ಉಚ್ಚವಾದ ಕೆಲಸವನ್ನು ಮಾಡುವವನ್ನು ಮನ್ನಣೆಗೆ ಯೋಗ್ಯನು, ಉಳಿದವರೆಲ್ಲಿರೂ ತುಚ್ಛರು ಎಂಬ ಭಾವನೆಯು ಎಳ್ಳಷ್ಟು ಇರಕೂಡದು.

೩ ಮೇಲೆ ಸೂತ್ರರೂಪದಿಂದ ಹೇಳಿದುವು ಆದರ್ಶ ಸಿದ್ಧಾಂತಗಳು. ಆದರೆ ಸಹಕಾರ-ತತ್ವದ ದೃಷ್ಟಿಯಿಂದ ಮತ್ತು ಜಗತ್ತಿನ ವ್ಯವಹಾರದ ದೃಷ್ಟಿಯಿಂದ ಯೋಚಿಸಿ ನೋಡಿದರೆ ನಮ್ಮ ಎಷ್ಟೋ ಅವಶ್ಯಕತೆಗಳನ್ನು ಪೂರೈಸಿಕೊಳ್ಳುವುದಕ್ಕಾಗಿ ಪರಿವಾರದವರ ಅಥವಾ ಗೆಳೆಯರ ಸಹಕಾರೀ ಶ್ರಮವಷ್ಟೇ ಸಾಕಾಗುವುದಿಲ್ಲ. ನೆರೆಹೊರೆಯವರ ಮತ್ತು ಗ್ರಾಮನಿವಾಸಿಗಳ ಸಂಗಡ ಸಹಕರಿಸಿ ಅವರೊಡನೆ ಕೆಲಸ ಮಾಡಬೇಕಾಗುವುದು. ಸ್ವದೇಶೀಧರ್ಮವು ಇದರಿಂದಲೇ ಅಂಕುರಿಸುವುದು.

೪ ಸ್ವದೇಶೀ ವ್ರತವು ಹುಟ್ಟಿದ್ದು ಕೇವಲ ದೇಶಾಭಿಮಾನದ ವಿಚಾರದಿಂದ ಅಲ್ಲ. ಅದು ಹುಟ್ಟಿದ್ದು ಧಾರ್ಮಿಕ ವಿಚಾರದಿಂದ. ವಿಶ್ವಬಂಧುತ್ವವನ್ನು ಬೆಳೆಸುವುದಕ್ಕಾಗಿ ನಾವು ಪ್ರಯತ್ನವನ್ನು ಮಾಡಬೇಕು. ಆದರೆ ಇದಕ್ಕೂ ಪೂರ್ವದಲ್ಲಿ, ನಾವು ಯಾವ ನೆರೆಹೊರೆಯವರ ಮಧ್ಯದಲ್ಲಿ ಹಗಲೂ ಇರುಳೂ ಬಾಳುವೆವೋ, ಮತ್ತು ಯಾರೊಡನೆ ನೂರಾರು ಕೆಲಸಗಳಲ್ಲಿ ನಮ್ಮ ಸಂಬಂಧಗಳು ಉಂಟಾಗುವವೋ, ಅವರೊಡನೆ ಯೋಗ್ಯ ರೀತಿಯಿಂದ ವ್ಯವಹಾರವನ್ನು ಮಾಡತಕ್ಕದ್ದು ನಮ್ಮ ಧರ್ಮವು. ಇದನ್ನು ಬಿಟ್ಟು ವಿಶ್ವಬಂಧುತ್ವವನ್ನು ವ್ಯಾಪಿಸಲು ಹೊರಟರೆ ಅದು ಡಂಭಾಚಾರವಾಗುವುದು. ಅಲ್ಲದೆ ವಿಶ್ವದೊಡನೆ ಬಂಧುತ್ವವೂ ಬೆಳೆಯಲಾರದು.

—ಗಾಂಧೀಜಿ

# ಸಾಮಾನ್ಯಜ್ಞಾನ

## ಕನ್ನಡ ಶೈಕ್ಷಣಿಕ ಮಾಸ ಪತ್ರಿಕೆ ಬಗ್ಗೆ ಅನಿಸಿಕೆಗಳು

ಮಾನ್ಯರೆ,

'ಸಾಮಾನ್ಯಜ್ಞಾನ' ಪತ್ರಿಕೆ ಪ್ರಾರಂಭಿಸುತ್ತಿದ್ದೀರೆಂದು ತಿಳಿಯಿತು, ಯಶಸ್ಸು ಸಿಗಲೆಂದು ಹಾರೈಸುತ್ತೇನೆ.

**—ಡಾ|| ಕೋಟ ಶಿವರಾಮ ಕಾರಂತ**

(ಆಗಸ್ಟ್ 1982)

o o o o o

ಮಾನ್ಯರೆ,

'ಸಾಮಾನ್ಯಜ್ಞಾನ'ವೆಂಬ ತಮ್ಮ ಪತ್ರಿಕೆ ಕನ್ನಡ ಪತ್ರಿಕೋದ್ಯಮದಲ್ಲಿ ಹೊಸದು. ಇದುವರೆಗೂ ಯಾರೂ ಇಂಥ ಸಾಹಸವನ್ನು ಕೈಕೊಂಡಿದ್ದಿಲ್ಲ. ತಮ್ಮ ಪತ್ರಿಕೆ ಶೈಕ್ಷಣಿಕ ಕ್ಷೇತ್ರದಲ್ಲಿ ಉತ್ತಮ ಸೇವೆ ಸಲ್ಲಿಸಲಿ ಹಾಗೂ ಎಲ್ಲ ರೀತಿಯಿಂದಲೂ ಅಭಿವೃದ್ಧಿ ಹೊಂದಲಿ ಎಂದು ಮನ ತುಂಬಿ ಹಾರೈಸಿ ಪತ್ರಿಕೆಗೆ ಶುಭ ಕೋರುತ್ತೇನೆ.

**—ಡಾ|| ಎಸ್. ಎಂ. ವೃಷಭೇಂದ್ರಸ್ವಾಮಿ**

(ಆಗಸ್ಟ್ 1982)

o o o o o

ಮಾನ್ಯರೆ,

ನಿಮ್ಮ ಪತ್ರಿಕೆ ಉಪಯುಕ್ತ ಮಾಹಿತಿ ನೀಡುತ್ತಿದೆ.

**—ಸಂತೋಷಕುಮಾರ ಗುಲ್ವಾಡಿ**

(ಮಾರ್ಚ 1983)

o o o o o

ಮಾನ್ಯರೆ,

ಸಾಮಾನ್ಯಜ್ಞಾನ ಸಂಚಿಕೆಗಳನ್ನು ನೋಡಿದೆ. ವಿದ್ಯಾರ್ಥಿಗಳಿಗೆ ಉಪಯುಕ್ತ ಹಾಗೂ ಸಂಗ್ರಹಯೋಗ್ಯ ವಿಷಯಗಳಿವೆ. ಕನ್ನಡದಲ್ಲಿ ಇದೊಂದು ಹೊಸ ಬಗೆಯ ಪತ್ರಿಕೆ. ಪತ್ರಿಕೆ ಅಭಿವೃದ್ಧಿ ಹೊಂದಲಿ.

**—ಮಹಾಂತೇಶ ಚ. ನೊರಬದ**

(ಸೆಪ್ಟೆಂಬರ್ 1982)

---

## ಕೊಂಡಜ್ಜಿ ಪ್ರಕಾಶನದ ಪ್ರಕಟಣೆಗಳು

**ಕ. ವೆಂ. ರಾಜಗೋಪಾಲ ಅವರ**

ಹಿಮಗಿರಿಯ ಕರೆ ಮತ್ತು ಅತ್ತೆಯ ಕಾಂಜಿ
(ಎರಡು ನಾಟಕಗಳು)

**ಕೊಂಡಜ್ಜಿ ಕೆ. ವೆಂಕಟೇಶ್ ಅವರ**

ಮಂಥನ
ದೇವಸನ್ನಿಧಿಯಲ್ಲಿ
ಸಾಮಾನ್ಯಜ್ಞಾನ (ವಾರ್ಷಿಕ)
ಒಲವು ನಿಲವು

**ಜಿ. ಬಾಲಚಂದ್ರ ಅವರ**

'ಸೈನ್ಸ್ ಇನ್ದಿ ಸರ್ವೀಸಸ್ ಆಫ್ ಮ್ಯಾನ್'

**ಮಾ ರಾ ಟ ಕ್ಕೆ ಸಿ ದ್ಧ ವಿ ದೆ.**

**ಓದುಗರಿಗೆ ಶೇ. 25 ರಿಯಾಯಿತಿ ಇದೆ.**

–: ಇಂದೇ ಬರೆಯಿರಿ :–

**ಕೊ ಂ ಡ ಜ್ಜಿ ಪ್ರ ಕಾ ಶ ನ**
205, ಮೊದಲ (ಎನ್) ಬ್ಲಾಕ್, ರಾಜಾಜಿನಗರ
ಬೆಂಗಳೂರು–560 010

# ಸಾಮಾನ್ಯ ಜ್ಞಾನಕ್ಕೆ ಲೇಖನಗಳನ್ನು ಕಳುಹಿಸಿ

ವಿಜ್ಞಾನ, ಭೂಗೋಳ, ಸಂಶೋಧನೆ, ಚರಿತ್ರೆ ಹಾಗೂ ಇತಿಹಾಸ ಮಹತ್ವಪೂರ್ಣ ವಿಷಯಗಳ ಬಗ್ಗೆ ಲೇಖನಗಳನ್ನು ಸ್ವೀಕರಿಸಲಾಗುವುದು. ಲೇಖಕರು ಹಾಳೆಯ ಒಂದೇ ಮಗ್ಗುಲಲ್ಲಿ ಸ್ಫುಟವಾಗಿ ಅಂದವಾಗಿ ಬರೆದು ತಮ್ಮ ಪೂರ್ಣ ಹೆಸರು ಮತ್ತು ವಿಳಾಸವನ್ನು ತಪ್ಪದೇ ಬರೆಯಬೇಕು. ಅಸ್ವೀಕೃತವಾದ ಲೇಖನಗಳನ್ನು ಹಿಂತಿರುಗಿಸಲಾಗುವುದಿಲ್ಲ. ಹಾಗೆ ಪಡೆಯಲಿಚ್ಛಿಸುವವರು ಸ್ವಂತ ವಿಳಾಸವಿರುವ (ಅಂಚೆ ಚೀಟಿಯೊಡನೆ) ಲಕೋಟೆಯನ್ನು ಲೇಖನದೊಂದಿಗೇ ಲಗತ್ತಿಸಿರಬೇಕು.

ಹೆಚ್ಚು ಹೆಚ್ಚು ಮಹತ್ವಪೂರ್ಣ ವಿಷಯಗಳನ್ನೊಳಗೊಂಡ ಲೇಖನಗಳಿಗೆ ಆದ್ಯತೆ ಉಂಟು. ವಿದ್ಯಾರ್ಥಿಗಳಿಗೆ, ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಕೂರುವ ಅಭ್ಯರ್ಥಿಗಳಿಗೆ ಉಪಯುಕ್ತ ಮಾಹಿತಿಗಳನ್ನೂ ಸಹ ಸಂಗ್ರಹಿಸಿ ಕಳಿಸಿಕೊಡಬಹುದು. ಜ್ಞಾನಾರ್ಜನೆಗೆ ಪೂರಕವಾದ ಲೇಖನಗಳನ್ನು ಮೊದಲು ಗಮನಿಸಲಾಗುವುದು.

ಲೇಖನದಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಸ್ವತಂತ್ರ ಸಂಪಾದಕರಿಗಿರುತ್ತದೆ. ದೀರ್ಘ ಲೇಖನಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಲೂ ಸಹ 'ಸಾಮಾನ್ಯಜ್ಞಾನ' ಸಿದ್ಧವಿದೆ.

—ಸಂಪಾದಕ

ಸಾಮಾನ್ಯ ಜ್ಞಾನ, ಕನ್ನಡ ಮಾಸಿಕ, ರಿಜಿಸ್ಟರ್ಡ್ ನಂ. ಬಿ.ಜಿ.ಡಬ್ಲ್ಯು ೭೫

ತೆರೆದ–ಅಂಚೆ

ಗೆ,

ಶ್ರೀಮತಿ/ಶ್ರೀ ................................................ ................................

................................................ ................................

................................................

ಎಲ್ಲಾ ವಿದ್ಯಾರ್ಥಿಗಳಿಗೂ ಉಪಾಧ್ಯಾಯರಿಗೂ ಮತ್ತು ಕೆ. ಪಿ. ಎಸ್. ಸಿ. ಮುಂತಾದ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಉಪಯುಕ್ತವಾದ "ಸಾಮಾನ್ಯ ಜ್ಞಾನ" ಕನ್ನಡ ಶೈಕ್ಷಣಿಕ ಮಾಸ ಪತ್ರಿಕೆಗೆ ಇಂದೇ ಚಂದಾದಾರರಾಗಿರಿ.

ಹಣವನ್ನು ಮನಿಯಾರ್ಡ್‌ರ್ ಮೂಲಕ ಕಳಿಸಿಕೊಡಿ. ಎಂ. ಓ. ಕೂಪನ್‌ನಲ್ಲಿ ತಮ್ಮ ವಿಳಾಸವನ್ನು ತಪ್ಪದೇ ಬರೆಯಿರಿ.

ಇಂದೇ ಬರೆಯಿರಿ : **"ಸಾಮಾನ್ಯ ಜ್ಞಾನ" ೨೦೫, ಒಂದನೇ 'ಎನ್' ಬ್ಲಾಕ್, ರಾಜಾಜಿನಗರ, ಬೆಂಗಳೂರು-೫೬೦ ೦೧೦**